# ಸಮಾಜೋ-ಭಾವನಾತ್ಮಕ ಬೆಂಬಲ ಕಾರ್ಯಕ್ರಮಗಳ ಅನುಷ್ಠಾನ

ನಿರ್ಮಲಾ ಡಿ.

ಸಮಾಜೋ–ಭಾವನಾತ್ಮಕ ಕಲಿಕಾ (Socio-emotional Learning -SEL) ಪ್ರಕ್ರಿಯೆಯ ಮೂಲಕ ಎಲ್ಲ ಚಿಕ್ಕ ಮಕ್ಕಳು ಮತ್ತು ವಯಸ್ಕರು ಜ್ಞಾನವನ್ನು ಸಂಪಾದಿಸಲು ಮತ್ತು ಅಳವಡಿಸಿಕೊಳ್ಳಲು, ಆರೋಗ್ಯಪೂರ್ಣವಾದ ನಡವಳಿಕೆಗಳನ್ನು ಬೆಳೆಸಿಕೊಳ್ಳಲು, ಭಾವನೆಗಳನ್ನು ನಿಯಂತ್ರಿಸಲು ಮತ್ತು ಇತರರ ಬಗ್ಗೆ ಸಹಾನುಭೂತಿಯನ್ನು ತೋರಿಸಲು, ಪೂರಕವಾದ ಸಂಬಂಧಗಳನ್ನು ಕಾಯ್ದುಕೊಳ್ಳಲು ಹಾಗೂ ಜವಾಬ್ದಾರಿಯುತ ಮತ್ತು ಚಿಂತನಾಶೀಲವಾದ ನಿರ್ಧಾರಗಳನ್ನು ಕೈಗೊಳ್ಳಲು ಸಾಧ್ಯವಾಗುತ್ತದೆ. ಈ ಫಲಿತಾಂಶವನ್ನು ಸಾಧಿಸಲು ಶಿಕ್ಷಕರ ಸಾಮಾಜಿಕ ಮತ್ತು ಭಾವನಾತ್ಮಕ ಹಿನ್ನೆಲೆಯನ್ನು ಅರ್ಥ ಮಾಡಿಕೊಳ್ಳುವುದು ಮುಖ್ಯ. ಜೊತೆಗೆ ಮಕ್ಕಳ ಕಲಿಕಾ ಪ್ರಕ್ರಿಯೆಯಲ್ಲಿ ಮತ್ತು ಪ್ರಾಥಮಿಕವಾಗಿ ಮಕ್ಕಳನ್ನು ಇನ್ನಷ್ಟು ಉತ್ತಮವಾಗಿ ಅರ್ಥ ಮಾಡಿಕೊಳ್ಳಲು ಇವೆಲ್ಲ ಎಷ್ಟು ಮುಖ್ಯ ಎಂಬುದರ ಬಗ್ಗೆ ಅವರಿಗೂ ಅರಿವು ಮೂಡಿಸಬೇಕಾಗುತ್ತದೆ. ಇದರಲ್ಲಿ ಮಕ್ಕಳ ಕಲಿಕೆಯ ಮೇಲೆ ಪರಿಣಾಮ ಬೀರುವ ಅವರ ಕುಟುಂಬ ಹಾಗೂ ಸಾಮಾಜಿಕ ಹಿನ್ನೆಲೆ ಕೂಡ ಸೇರಿದೆ. ಮಕ್ಕಳ ಶಿಕ್ಷಣದ ಮೇಲೆ ಆಘಾತಕಾರಿ ಪರಿಣಾಮ ಬೀರಿರುವ ಕೋವಿಡ್–19ರ ಪರಿಸ್ಥಿತಿಯಿಂದ ನಾವು ಈಗಷ್ಟೇ ಪಾರಾಗಿ ಬಂದಿರುವ ಹಂತದಲ್ಲಿ ವಿಶೇಷವಾಗಿ, ಇದು ಬಹುಮುಖ್ಯ ಸಂಗತಿಯಾಗಿದೆ. ಇದರಿಂದಾಗಿ ಅವರ ನಡವಳಿಕೆಯಲ್ಲಿ ಬದಲಾವಣೆಗಳಾಗಿದ್ದವು ಮತ್ತು ಅವರ ಕಲಿಕಾ ಪ್ರಕ್ರಿಯೆಯಲ್ಲಿ ಅಸ್ಥಿರತೆ ಉಂಟಾಗಿತ್ತು. ಇದು ಬದಲಾಗಲು ಶಿಕ್ಷಕರು ತಮ್ಮ ವಿದ್ಯಾರ್ಥಿಗಳ ಮಾತುಗಳಿಗೆ ಕಿವಿಯಾಗಬೇಕು ಮತ್ತು ಅವರೊಂದಿಗೆ ಉತ್ತಮ ಸಂಬಂಧವನ್ನು ಹೊಂದಲು ಕಾರ್ಯನಿರ್ವಹಿಸಬೇಕು. ಮಕ್ಕಳ ಯೋಗಕ್ಷೇಮದ ಈ ಅಂಶವನ್ನು ನಿರ್ವಹಿಸಲು ನಾವು ಮೂರು ಕಾರ್ಯಕ್ರಮಗಳ ಮೇಲೆ ಗಮನವನ್ನು ಹರಿಸಿದ್ದೇವೆ.

## ಎಸ್‌ಇಎಲ್ ಗೆ ಮೂರು ಕಾರ್ಯಕ್ರಮಗಳು

ವಿದ್ಯಾ ಪ್ರವೇಶ

ಒಂದು ಮತ್ತು ಎರಡನೇ ತರಗತಿಗಳಿಗೆ ಹತ್ತು ವಾರಗಳ ಅಲ್ಪಾವಧಿ ಕಾರ್ಯಕ್ರಮವಾಗಿ 'ವಿದ್ಯಾ ಪ್ರವೇಶ' ಎಂಬ ವಿಧಾನವನ್ನು ಜಾರಿಗೆ ತರಲಾಯಿತು. 'ಸ್ವಾಗತಿಸು ಮತ್ತು ಭೇಟಿಯಾಗು' (Greet & Meet) ಎಂಬ ಈ ಉಪಕ್ರಮದಲ್ಲಿ ಶಿಕ್ಷಕರು ಪ್ರತಿ ದಿನವೂ ವಿಭಿನ್ನ ರೀತಿಯಲ್ಲಿ ಮಕ್ಕಳನ್ನು ಸ್ವಾಗತಿಸುವ ಮಾದರಿಯನ್ನು ವಿನ್ಯಾಸಗೊಳಿಸಿದ್ದರು. ತರುವಾಯ ಮಕ್ಕಳು ತರಗತಿಯಲ್ಲಿ ಸೇರಿ ತಮ್ಮ ದಿನಚರಿ, ಕುಟುಂಬ, ಆಸಕ್ತಿಗಳು ಅಥವಾ ಅವರು ಹಂಚಿಕೊಳ್ಳಲು ಬಯಸಿದ ಇನ್ನೂ ಅನೇಕ ಸಂಗತಿಗಳ ಬಗ್ಗೆ ಮಾತನಾಡಿದರು. ಈ ಅವಕಾಶ ಮಕ್ಕಳಿಗೆ ಅನೇಕ ಅನುಭವಗಳನ್ನು ಹಂಚಿಕೊಳ್ಳಲು ವೇದಿಕೆಯನ್ನು ಒದಗಿಸಿದ್ದು ಮಾತ್ರವಲ್ಲದೆ ಶಿಕ್ಷಕರಿಗೂ ಕೂಡ ಮಕ್ಕಳನ್ನು ಅರ್ಥ ಮಾಡಿಕೊಳ್ಳಲು, ಅವರ ದಿನನಿತ್ಯದ ಚಟುವಟಿಕೆಗಳು, ಮನೆಯ ವಾತಾವರಣವನ್ನು ತಿಳಿದುಕೊಳ್ಳಲು ಉತ್ತಮ ಅವಕಾಶ ಒದಗಿಸಿತು.

ಶಿಕ್ಷಕರು ಮಕ್ಕಳನ್ನು ನಗುನಗುತ್ತಾ ಬರಮಾಡಿಕೊಂಡಿದ್ದರಿಂದ, ಅವರ ಕೈ ಕುಲುಕಿದ್ದರಿಂದ ಮತ್ತು ಅವರನ್ನು ಅಪ್ಪಿ ಸ್ವಾಗತಿಸಿದ್ದರಿಂದ ಮಕ್ಕಳು ಈ ಕಲಾಪವನ್ನು ಬಹುವಾಗಿಯೇ ಇಷ್ಟಪಟ್ಟರು. ಇಂತಹ ಭಾವಸೂಚಕಗಳು (gestures) ಮಕ್ಕಳೊಂದಿಗೆ ಉತ್ತಮ ಸಂಬಂಧವನ್ನು ಬೆಳೆಸಿಕೊಳ್ಳಲು ಮುಖ್ಯ ಮತ್ತು ಮಕ್ಕಳ ಭಾವನೆಗಳಿಗೆ ಸ್ಪಂದಿಸಲು ಶಿಕ್ಷಕರಿಗೆ ಸಹಕಾರಿಯಾದವು. ನಮಗೆಲ್ಲ ತಿಳಿದಿರುವಂತೆ ಸಮಾಜೋ–ಭಾವನಾತ್ಮಕ ಕಳಕಳಿಗಳನ್ನು (socio-emotional Concerns) ನಿಭಾಯಿಸುವುದು ಕೇವಲ ಒಂದು ಬಾರಿಯ ಚಟುವಟಿಕೆಯಲ್ಲ ಮತ್ತು ಅದನ್ನು ಬೋಧನೆ– ಕಲಿಕೆ ಪ್ರಕ್ರಿಯೆಯೊಂದಿಗೆ ಒಟ್ಟಾರೆಯಾಗಿ ನೋಡಬೇಕಾಗುತ್ತದೆ. ಈ ಪ್ರಕ್ರಿಯೆ ಮುಂದುವರಿದಿರುವಂತೆ ಮಕ್ಕಳ ಭಾವನಾತ್ಮಕ ಅಗತ್ಯಗಳನ್ನು ನಿಭಾಯಿಸುವ ನಿಟ್ಟಿನಲ್ಲಿ ಇತರ ಕಾರ್ಯತಂತ್ರಗಳನ್ನು ಜಾರಿಗೆ ತರಲಾಯಿತು. ಇವುಗಳಲ್ಲಿ ಕೆಲವೆಂದರೆ ಕತೆಗಳನ್ನು ಹೇಳುವುದರ ಮೂಲಕ ವಿವಿಧ ಭಾವನೆಗಳನ್ನು ವ್ಯಕ್ತಪಡಿಸುವುದು ಮತ್ತು ತರಗತಿಯಲ್ಲಿ ಭಾವನೆಗಳಿಗೆ ಸಂಬಂಧಿಸಿದ ನಕಾಶೆಗಳನ್ನು ತೂಗುಹಾಕುವುದರಿಂದ ಮಕ್ಕಳು ನಾನಾ ಭಾವನೆಗಳನ್ನು ಅರ್ಥಮಾಡಿಕೊಳ್ಳಲು, ಅನುಭವಿಸಲು ಮತ್ತು ಅವುಗಳಿಗೆ ಹೇಗೆ ಪ್ರತಿಕ್ರಿಯೆ ನೀಡಬೇಕು ಎಂಬುದನ್ನು ತಿಳಿದುಕೊಳ್ಳಲು ಸಹಾಯವಾಗುತ್ತದೆ.

ನಾವು ಶಿಕ್ಷಕರೊಂದಿಗೆ ಈ ಚರ್ಚೆಗಳನ್ನು ಆರಂಭಿಸಿದ್ದು ನಮ್ಮ ಮುಂದಿನ ಎಲ್ಲ ಕಾರ್ಯಕ್ರಮಗಳಲ್ಲಿ ಈ ಅಂಶಗಳನ್ನು ಸೇರಿಸಲು ಯೋಜನೆ ಮಾಡಿದ್ದೇವೆ. ಆದರೆ, ಕಲಿಕೆಯಲ್ಲಿ ಮಕ್ಕಳ ಆಸಕ್ತಿಯ ಕೊರತೆ ಮತ್ತು ಗಣನೀಯವಾಗಿ ಕುಸಿದಿರುವ ಏಕಾಗ್ರತೆ ಮುಂತಾದ ಕೆಲವು ಸವಾಲುಗಳನ್ನು ಮೀರಬೇಕಾಗಿದೆ.

ಮಳೆಬಿಲ್ಲು

ನಾಲ್ಕರಿಂದ ಎಂಟನೇ ತರಗತಿಯ ಮಕ್ಕಳಿಗೆ ನಾವು ಆರಂಭಿಸಿದ ಇನ್ನೊಂದು ಕಾರ್ಯಕ್ರಮವೆಂದರೆ 'ಮಳೆಬಿಲ್ಲು'. ಶಾಲೆಗೆ ಬರುವಂತೆ ಮಕ್ಕಳನ್ನು ಉತ್ತೇಜಿಸುವುದು ಈ ಕಾರ್ಯಕ್ರಮದ

ಮುಖ್ಯ ಉದ್ದೇಶವಾಗಿತ್ತು. ತರಗತಿಯಲ್ಲಿ ಉತ್ತಮ ನಿರ್ವಹಣೆ ತೋರುವುದು, ಶಾಲೆಗೆ ಬಂದು ತರಗತಿಯೊಳಗೆ ಕುಳಿತುಕೊಳ್ಳುವುದೇ ಅತ್ಯಂತ ನಿರ್ಣಾಯಕ. ಇದು ಸಂಪೂರ್ಣವಾಗಿ ಚಟುವಟಿಕೆ ಆಧಾರಿತವಾದ ಕಾರಣ ಮಕ್ಕಳು ಈ ಕಾರ್ಯಕ್ರಮದಲ್ಲಿ ಅತ್ಯಂತ ಖುಷಿಯಿಂದ ತಮ್ಮನ್ನು ತೊಡಗಿಸಿಕೊಂಡರು. ಪಾಲಕರು ಶಾಲೆ ಮತ್ತು ಮಕ್ಕಳಿಂದ ಅತಿಯಾದ ನಿರೀಕ್ಷೆಯನ್ನು ಮಾಡುವುದರಿಂದ ಮಕ್ಕಳಿಗೆ ಶಿಕ್ಷಣ ನೀಡಿದಂತೆ ಪಾಲಕರಿಗೆ ಅರಿವು ಮೂಡಿಸುವುದು ಕೂಡ ಬಹುಮುಖ್ಯ ಎಂದು ಶಿಕ್ಷಕರಲ್ಲೊಬ್ಬರು ಅಭಿಪ್ರಾಯಪಟ್ಟರು. ಮಕ್ಕಳ ಕಲಿಕೆಯ ಗತಿಯ ಬಗ್ಗೆ ಶಿಕ್ಷಕರಿಗೆ ಯಾವತ್ತೂ ಕಳಕಳಿ ಇದ್ದೇ ಇರುತ್ತದೆ ಎಂಬುದನ್ನು ಪಾಲಕರು ಅರ್ಥ ಮಾಡಿಕೊಳ್ಳಬೇಕು. ಯಾಕೆಂದರೆ ಕಲಿಕೆಯಲ್ಲಿ ಸುಧಾರಣೆ ಎನ್ನುವುದು ಸುದೀರ್ಘ ಪ್ರಕ್ರಿಯೆ, ಮಕ್ಕಳ ಭಾವನಾತ್ಮಕ ಯೋಗಕ್ಷೇಮದ ಹಿನ್ನೆಲೆಯಲ್ಲಿ ಅದನ್ನು ಅತ್ಯಂತ ಸೂಕ್ಷ್ಮವಾಗಿ ನಿಭಾಯಿಸಬೇಕಾಗುತ್ತದೆ.

ಶಾಲೆಗೆ ಹೋಗುವ ಮೊದಲ ತಲೆಮಾರಿನ ಮಕ್ಕಳಾದರೆ ಅವರಿಗೆ ಶಾಲಾ ಸಮಯದ ಬಳಿಕ ಓದು–ಕಲಿಕೆ ವಿಚಾರದಲ್ಲಿ ಯಾವುದೇ ಸಹಾಯ ಸಿಗುವುದಿಲ್ಲ. ಹಾಗಾಗಿ ಶಿಕ್ಷಕರ ಕಾರ್ಯ ಕಠಿಣವಾಗಿರುತ್ತದೆ ಮತ್ತು ಅಗತ್ಯವಿರುವ ಫಲಿತಾಂಶವನ್ನು ಪಡೆಯಲು ಅವರು ಅತ್ಯಂತ ಸೂಕ್ಷ್ಮವಾಗಿ ಕೆಲಸ ಮಾಡಬೇಕಾಗುತ್ತದೆ. ಶಿಕ್ಷಕರ ಇಂತಹ ಕಳಕಳಿಗಳಿಂದಲೂ ಮಕ್ಕಳ ಸಾಮಾಜಿಕ ಮತ್ತು ಭಾವನಾತ್ಮಕ ಅಗತ್ಯಗಳನ್ನು ಪೂರೈಸಲು ಸಾಧ್ಯ.

ನಲಿ ಕಲಿ

ಮೂರು ವರ್ಷ ವಯಸ್ಸಿನ ಮಕ್ಕಳು ಈ ನಲಿ–ಕಲಿ ಪ್ರಕ್ರಿಯೆಯಲ್ಲಿ ಭಾಗಿಯಾಗುತ್ತಾರೆ. ಇದು ಸಂಪೂರ್ಣವಾಗಿ ಚಟುವಟಿಕೆ ಆಧಾರಿತವಾದುದು ಮತ್ತು ಸಹ ಮಕ್ಕಳೊಂದಿಗೆ ಕಲಿಯುವುದು. ಅಂದರೆ ಇದರಲ್ಲಿ ನಿರ್ದಿಷ್ಟವಾದ ಕೂರುವ ವ್ಯವಸ್ಥೆಯಿರುವುದಿಲ್ಲ. ಮಕ್ಕಳು ಅತ್ತಿತ್ತ ಅಡ್ಡಾಡುತ್ತಲೇ ತಮ್ಮ ಸಹಪಾಠಿಗಳೊಂದಿಗೆ ಬೆರೆಯುತ್ತ ಅಭಿನಯವನ್ನೊಳಗೊಂಡ ಹಾಡುಗಳನ್ನು ಹಾಡಬೇಕಾಗುತ್ತದೆ. ಶಿಕ್ಷಕಿ ಕೂಡ ಗುಂಪಿನಲ್ಲಿ/ ವೃತ್ತದಲ್ಲಿ ಕುಳಿತಿರುತ್ತಾರೆ. ಅವರದ್ದು ಸುಗಮಕಾರರ ಕೆಲಸ. ಇದು ಮಕ್ಕಳ ಭಾವನಾತ್ಮಕ ಅಗತ್ಯಗಳನ್ನು ಪೂರೈಸುವ ರೀತಿ ಕೂಡ ಹೌದು. ಶಿಕ್ಷಕಿಯೊಬ್ಬರು, ತಮ್ಮ ಶಾಲೆಯಲ್ಲಿ ಕಲಿಕಾ ಪ್ರಕ್ರಿಯೆಯ ಪ್ರತಿಯೊಂದು ಹಂತದಲ್ಲಿಯೂ ಕೂಡ ತಮ್ಮ ಭಾವನೆಗಳನ್ನು ವ್ಯಕ್ತಪಡಿಸಲು ಮಕ್ಕಳಿಗೆ ಅವಕಾಶಗಳನ್ನು ನೀಡುವುದರ ಮೂಲಕ ಭಯ ಮುಕ್ತ ವಾತಾವರಣವನ್ನು ಸೃಷ್ಟಿಸುವುದರ ಜೊತೆಗೆ ಪ್ರತಿಯೊಂದು ಸಣ್ಣಸಣ್ಣ ಸಂಗತಿಗಳನ್ನೂ ಕೂಡ ಉದಾಹರಣೆಯೊಂದಿಗೆ ತಿಳಿಸುವ ಕೆಲಸ ಮಾಡುತ್ತೇನೆ ಎಂದು ತಿಳಿಸಿದರು. ಉದಾಹರಣೆಗೆ ಮಕ್ಕಳು ಶಾಲಾ ಆವರಣದೊಳಗೆ ಕಸವನ್ನು ಎಸೆದಾಗ ಆಕೆ ಅದನ್ನು ಹೆಕ್ಕಿ ಕಸದಬುಟ್ಟಿಗೆ



ಚಿತ್ರ 1: ಮಕ್ಕಳು ಸ್ಥಾನ ಮೌಲ್ಯವನ್ನು ಅರ್ಥ ಮಾಡಿಕೊಳ್ಳುವ ಚಟುವಟಿಕೆಯಲ್ಲಿ ತೊಡಗಿರುವುದು.

ಹಾಕುತ್ತಾರೆ. ಅದಾದ ಬಳಿಕ ಆಕೆ ಅದನ್ನು ಮಾಡಬೇಕಾಗಲಿಲ್ಲ, ಮಕ್ಕಳೇ ಅದನ್ನು ಅನುಸರಿಸಿ, ಕಸದ ಬುಟ್ಟಿಯಲ್ಲಿ ಕಸ ಹಾಕುವ ಅಭ್ಯಾಸವನ್ನು ಬೆಳೆಸಿಕೊಂಡರು. ಇದರ ಜೊತೆಗೆ ಮಕ್ಕಳು ತಪ್ಪು ಮತ್ತು ಸರಿಯನ್ನು ತಿಳಿದುಕೊಳ್ಳಲು ತಮ್ಮ ಮಾತೃಭಾಷೆಯಲ್ಲಿ ಕತೆಗಳು ಮತ್ತು ಜಾನಪದ ಕತೆಗಳನ್ನು ಹೇಳಿದರು. ತರಗತಿಯಲ್ಲಿ ಮೌಲ್ಯಗಳನ್ನು ಕಲಿಯುವುದು ಮತ್ತು ಮಕ್ಕಳ ಸಾಮಾಜಿಕ ಮತ್ತು ಭಾವನಾತ್ಮಕ ಯೋಗಕ್ಷೇಮದ ಮಹತ್ವದ ಬಗ್ಗೆ ತಿಳಿದುಕೊಳ್ಳುವುದು ಅವರ ಬೆಳವಣಿಗೆಯ ಮೇಲೆ ಪರಿಣಾಮವನ್ನು ಬೀರುವುದಲ್ಲದೆ ಬೋಧನೆ– ಕಲಿಕಾ ಪ್ರಕ್ರಿಯೆಯಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುತ್ತದೆ.



**ನಿರ್ಮಲಾ ಡಿ** ಅವರು ಕಲಬುರಗಿ ಜಿಲ್ಲೆಯ ಜೇವರ್ಗಿ ವಲಯದ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಸಂಪನ್ಮೂಲ ವ್ಯಕ್ತಿ. ಬೆಂಗಳೂರು ವಿಶ್ವವಿದ್ಯಾಲಯದಿಂದ ಗಣಿತದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದಾರೆ. ಸಂಗೀತಾಸಕ್ತರಾಗಿರುವ ಇವರು ಹಾಡುವುದರಲ್ಲಿ ಮತ್ತು ಸಾಹಿತ್ಯೇತರ ಬರಹಗಳನ್ನು ಓದುವುದರಲ್ಲಿ ಆಸಕ್ತಿ ಹೊಂದಿದ್ದಾರೆ. ಅವರನ್ನು nirmala@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಮಂಜುನಾಥ್‌ಚಾಂದ್** | ಪರಿಶೀಲನೆ: **ನಾಗಮಣಿ ಎಸ್.ಎನ್.**